ಲಿಖಿತ ಮೂಲಕ ಉತ್ತರಿಸುವ



ಕರ್ನಾಟಕ ವಿಧಾನ ಪರಿಷತ್ತು

ನೂರ ನಲವತ್ತನೆಯ ಅಧಿವೇಶನ

ಗುರುವಾರ, ದಿನಾಂಕ : 12 ನೇ ಮಾರ್ಚ್, 2020

ಸಣ್ಣ ನೀರಾವರಿ ಇಲಾಖೆ ವತಿಯಿಂದ ಕೆರೆಗಳಿಗೆ ನೀರು ತುಂಬಿಸುವ ಯೋಜನೆ ಬಗ್ಗೆ

ಶ್ರೀ ಕಾಂತರಾಜ್ (ಬಿಎಂಎಲ್) (ಸ್ಥಳೀಯ ಸಂಸ್ಥೆಗಳ ಕ್ಷೇತ್ರ) :-

740 (700) ಮಾನ್ಯ ಕಾನೂನು, ಸಂಸದೀಯ ವ್ಯವಹಾರಗಳು ಮತ್ತು ಶಾಸನ ರಚನೆ ಹಾಗೂ ಸಣ್ಣ ನೀರಾವರಿ ಸಚಿವರು ಈ ವಿಷಯಗಳನ್ನು ದಯವಿಟ್ಟು ತಿಳಿಸುವರೆ:-

(ಅ) ಸಣ್ಣ ನೀರಾವರಿ ಇಲಾಖೆಯಿಂದ ಚಿಕ್ಕನಾಯಕನಹಳ್ಳಿ ತಾಲ್ಲೂಕಿನ 96 ಕೆರೆಗಳಿಗೆ ನೀರು ತುಂಬಿಸುವ ಯೋಜನೆಯನ್ನು ಕೈಗೊಳ್ಳಲಾಗಿದೆಯೇ ; ಹಾಗಿದ್ದಲ್ಲಿ, ಈ ಯೋಜನೆಗೆ ಎಷ್ಟು ಹಣವನ್ನು ಖರ್ಚು ಮಾಡಲಾಗುತ್ತಿದೆ ;

(ಆ) ಈ 96 ಕೆರೆಗಳಿಗೆ ನೀರು ತುಂಬಿಸಲು ಎತ್ತಿನಹೊಳೆ, ಹೇಮಾವತಿ ಮತ್ತು ಭದ್ರಾ ಮೇಲ್ದಂಡೆ ಯೋಜನೆಗಳ ನೀರನ್ನು ಪಡೆದು ಈ ಕೆರೆಗಳನ್ನು ತುಂಬಿಸಲಾಗುವುದೇ ; ಹಾಗಿದ್ದಲ್ಲಿ, ಯಾವ ಯಾವ ಯೋಜನೆಗಳಿಂದ ಎಷ್ಟು ಪ್ರಮಾಣದ ನೀರನ್ನು ಪಡೆಯಲಾಗುವುದು; (ವಿವರ ನೀಡುವುದು)

(ಇ) ಈ ಯೋಜನೆಗಳಿಂದ ಚಿಕ್ಕನಾಯಕನಹಳ್ಳಿ ತಾಲ್ಲೂಕಿನ ಯಾವ ಯಾವ ಹೋಬಳಿಗಳಲ್ಲಿ ಎಷ್ಟು ಹಳ್ಳಿಗಳ ಕೆರೆಗಳನ್ನು ಆಯ್ಕೆ ಮಾಡಿಕೊಳ್ಳಲಾಗಿದೆ; (ಮಾಹಿತಿ ಒದಗಿಸುವುದು)

(ಈ) ರೈತರ ಜಮೀನನ್ನು ಭೂಸ್ವಾಧೀನ ಪಡಿಸಿಕೊಳ್ಳಲು ನೀಡಿರುವ ಪರಿಹಾರದ ಮೊತ್ತವೆಷ್ಟು ; ಈ ಮೊತ್ತವನ್ನು ಮಾರುಕಟ್ಟೆಯ ದರಕ್ಕಿಂತ ಎಷ್ಟು ಪಟ್ಟು ಹೆಚ್ಚಿಗೆ ನೀಡಲಾಗುವುದು ; ಹಾಗೂ ತುಮಕೂರು ಜಿಲ್ಲೆಯ ಯಾವ ಯಾವ ತಾಲ್ಲೂಕುಗಳನ್ನು ಈ ಯೋಜನೆ ವ್ಯಾಪ್ತಿಗೆ ತರಲಾಗಿದೆ ;

(ಉ) ಇದೇ ಸೂತ್ರವನ್ನು ಅನುಸರಿಸಿ ರಾಜ್ಯದ ಬೇರೆ ಬೇರೆ ಅಭಿವೃದ್ಧಿಗೆ ಭೂಸ್ವಾಧೀನವಾದ ರೈತರ ಜಮೀನುಗಳಿಗೂ ಪರಿಹಾರದ ಮೊತ್ತವನ್ನು ನೀಡಲಾಗುವುದೆ ;

(ಊ) ಎತ್ತಿನಹೊಳೆ ಕಾಮಗಾರಿಯನ್ನು ಯಾವ ಯಾವ ಕಂಪನಿಗಳಿಗೆ ವಹಿಸಿಕೊಡಲಾಗಿದೆ ; ಆ ಕಂಪನಿಗಳ ಹೆಸರು, ಮಾಲೀಕರು ಮತ್ತು ಆ ಕಂಪನಿಗಳಿಗೆ ವಹಿಸಿಕೊಟ್ಟಿರುವ ಕಾಮಗಾರಿಗಳ ವಿವರ, ಆ ಕಾಮಗಾರಿಗಳಿಗೆ ನೀಡಿರುವ ಮೊತ್ತವೆಷ್ಟು ? (ಸಂಪೂರ್ಣ ಮಾಹಿತಿಯನ್ನು ದಾಖಲೆಗಳೊಂದಿಗೆ ಒದಗಿಸುವುದು)